ನವಸಾಕ್ಷರ ಪುಸ್ತಕ ಮಾಲೆ ೮೩.

# ಕಾಡ್ಯನಾಟದ ಕತೆಗಳು

ಎ.ವಿ.ನಾವಡ






ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

ಲೋಕಶಿಕ್ಷಣ ನಿರ್ದೇಶನಾಲಯ

ನವಸಾಕ್ಷರ ಪುಸ್ತಕ ಮಾಲೆ - ೮೩

# ಕಾಡ್ಯನಾಟದ ಕತೆಗಳು

ಎ. ವಿ. ನಾವಡ







ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ-೫೮೩ ೨೭೭

KADYANATADA KATHEGALU : By A. V. Navada. Published by The Director of Prasaranga, Kannada University, Hampi - 583 211, KARNATAKA.
First Impression 1994, Pp. i i + 26, Rs. 8.00.











**ಸಂಯೋಜನಾಧಿಕಾರಿ**
ಡಾ. ಎಚ್. ಎಸ್. ಶ್ರೀಮತಿ
ಪಠ್ಯ ಪುಸ್ತಕ ರಚನಾ ವಿಭಾಗ

**ಪ್ರಕಾಶಕರು**
ನಿರ್ದೇಶಕರು
ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ - ೫೮೩ ೨೧೧

**ಮುಖಪುಟ ವಿನ್ಯಾಸ**
ಕೆ. ಮಕಾಳಿ

**ಬೆಲೆ : ರೂ. ೮.೦೦**

ಮುದ್ರಕರು
ಬೃಂದಾವನ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್ ಪ್ರೈ.ಲಿ.
೧೨/೧೩, ಲಾಲ್‌ಬಾಗ್ ಫೋರ್ಟ್ ರಸ್ತೆ,
ಬೆಂಗಳೂರು – ೫೬೦ ೦೦೪.

# ಕಾಡ್ಯನಾಟದ ಕತೆಗಳು

ಆಲೂರು ದಕ್ಷಿಣ ಕನ್ನಡ ಜಿಲ್ಲೆಯ ಒಂದು ಹಳ್ಳಿ. ಊರ ಆಚೆಗೆ ಕಾಡಿನಲ್ಲಿ ಮೇರರ ಹಟ್ಟಿ. ಹತ್ತಾರು ಚಿಕ್ಕ ಚಿಕ್ಕ ಜೋಪಡಿಗಳು. ಮೇರರ ಹಟ್ಟಿಯಲ್ಲಿ ಎಂದಿಲ್ಲದ ಸಂಭ್ರಮ, ಸಡಗರ. ಅವರ ಕುಲದೇವರಿಗೆ ಕಾಡ್ಯನಾಟವಂತೆ ಹಾಲಾಡಿಯಲ್ಲಿ. ಹಟ್ಟಿಯ ಮೇರರೆಲ್ಲ ಕಾಡ್ಯನಾಟಕ್ಕೆ ಒಟ್ಟಾಗಿ ಹೊರಟಿದ್ದರು. ಎಲ್ಲರಿಗೂ ಕಾಡ್ಯನಾಟ ಕಾಣುವ ತವಕ.

ಹೀಗೆ ಹೊರಟ ಗುಂಪಿನಲ್ಲಿ ನಾಗಮೇರನೂ ಇದ್ದ. ನಾಗಮೇರ ಕಾಡ್ಯನಾಟದ ಬೈದ್ಯ ಕುಟುಂಬದವ. ದಾರಿಸಾಗುತ್ತ ನಾಗಮೇರ ತನ್ನ ಅಪ್ಪ, ಅಜ್ಜ ಬೈದ್ಯರಾಗಿ ಕಾಡ್ಯನಾಟ ಮಾಡಿದ್ದು, ಚಿಕ್ಕವನಾಗಿದ್ದ ತಾನು ಕಂಡಿದ್ದು ಎಲ್ಲವನ್ನೂ ವಿವರವಾಗಿ ಹೇಳುತ್ತಿದ್ದ. ಅಲ್ಲಿ ಬರೆಯುವ ಬಣ್ಣದ ಮಂಡಲ, ಕುಣಿತ, ಹಾಡುಗಳು ಎಲ್ಲವೂ ಬಹಳ ಸೊಗಸು. ನಾಲ್ಕು ರಾತ್ರಿ, ಮೂರು ಹಗಲುಗಳ ಆಚರಣೆ ಅದು. ಡೋಲಿನ ಬಡಿತದೊಂದಿಗೆ ಹಾಡುವ ಹಾಡುಗತೆಗಳು ನಿರಂತರವಾಗಿ ನಡೆಯುತ್ತವೆ. ಎಷ್ಟೊಂದು ಹಾಡುಗಳು! ಎಷ್ಟೊಂದು ಕತೆಗಳು! ಕಾಡ್ಯನಾಟದಲ್ಲಿ ಬೈದ್ಯರು ಅವನ್ನೆಲ್ಲ ಹಾಡಬೇಕು ಎಂದು ಆ ಕತೆಗಳನ್ನು ಹೇಳತೊಡಗಿದ.

ಕಾಡ್ಯ ನಮ್ಮ ಮೇರಹರಿಜನರ ಕುಲದೈವ. ಅದು ಕರಿನಾಗ, ಕಾಳಿಂಗ ಸರ್ಪ. ಕಾಡ್ಯನ ಆರಾಧನೆಯೆ ಕಾಡ್ಯನಾಟ. ಹೊನ್ನಿ ನಮ್ಮ ಕುಲದ ಮೂಲಹೆಣ್ಣು. ಅವಳಿಗೆ ಕಾಡಿನಲ್ಲಿ ಕಾಡ್ಯನ ಕಳಸ ಸಿಕ್ಕಿದ್ದು. ಅದನ್ನು ಕಾಡಿನಲ್ಲಿ ಸ್ಥಾಪಿಸಿ ಕಾಡ್ಯನಾಟ ಮಾಡಿಸಿದಳು. ಈ ಬಗ್ಗೆ ಕಾಡ್ಯನ ಹುಟ್ಟಿನ ಹಾಡುಗತೆಯೇ ಇದೆ.

## ಕಾಡ್ಯನ ಹುಟ್ಟು ಕತೆ

ಕಾಡಿನ ಬೇಡರ ಹೆಣ್ಣುಮಗಳು ಮೇರರ ಹೊನ್ನಿ. ಒಂದು ಶನಿವಾರ ಹೊನ್ನಿ ಹುಟ್ಟಿದಳು. ಬೆಳೆದು ಹೆಣ್ಣು ಆದಳು. ಹೆಣ್ಣು ಹೋಗಿ ಹೆಂಗಸಾದಳು. ಹೀಗೆ ಇರುವಾಗ ಒಮ್ಮೆ ಹೊನ್ನಿಗೆ ಗಾಳಿದೇವರ ಸಂಗವಾಯಿತು. ಮುಟ್ಟು ನಿಂತು ಬಸುರಿ ಆದಳು. ಬಸುರಿಗೆ ತಿಂಗಳು ತಿಂಗಳು ಕಳೆಯಿತು. ಹತ್ತು ತಿಂಗಳು ಸಂದಿತು. ಬೇನೆ ಕಾಣಿಸಿತು. ನಡುಹಗಲಲ್ಲಿ ಹೊನ್ನಿ ಹಡೆದಳು. ಒಂದೇ ಬಸುರಿಗೆ ಏಳು ಮಕ್ಕಳು ಹುಟ್ಟಿದರು.

ಆ ಹೊತ್ತಿಗೆ ಬರಗಾಲ ಬಂದಿತು. ಉಣ್ಣಲು ಅನ್ನ, ಉಡಲು ಬಟ್ಟೆಗೂ ಇಲ್ಲವಾಯಿತು. ಕಣ್ಣೀರು ಸುರಿಸಿದಳು. ಹಸು ಮಕ್ಕಳು ಹಸಿದು ಅಳುತ್ತಿದ್ದಾವೆ. ಹೊನ್ನಿ ಕಡು ದುಃಖ ಮಾಡಿದಳು. ಒಡೆಯರ ನೆನಪಾಯಿತು. ಒಡೆಯರ ಮನೆಗೆ ಓಡಿದಳು. ಬಾಗಿಲಲ್ಲಿ ನಿಂತಳು. "ಒಡೆಯರೆ, ಒಡೆಯರೆ" ಎಂದು ಕರೆದಳು. ಒಡೆಯರು ಹೊರ ಬಂದರು. "ಏನು ಬಂದೆ ಹೊನ್ನಿ ? ಏಕೆ ಬಂದೆ ಹೊನ್ನಿ?"ಎಂದು ಕೇಳಿದರು."ಒಡೆಯರೆ, ಬರಗಾಲ ಬಂದಿದೆ. ಆ ಕಾಲಕ್ಕೆ ನನಗೆ ಏಳು ಮಂದಿ ಮಕ್ಕಳು ಹುಟ್ಟಿದ್ದಾರೆ. ಮನೆಯಲ್ಲಿ ಒಂದು ಹಿಡಿ ಅಕ್ಕಿ ಇಲ್ಲ. ಉಡಲು ತುಂಡು ಬಟ್ಟೆ ಇಲ್ಲ. ಹಸುಮಕ್ಕಳು ಹಸಿದಿದ್ದಾವೆ. ಒಂದೇ ಸಮನೆ ಅಳುತ್ತಿದ್ದಾವೆ" ಎಂದು ಕಣ್ಣೀರು

ಸುರಿಸಿದಳು. ಒಡೆಯರು ಜಳ್ಳುಬತ್ತ ನೀಡಿದರು. ಹೊನ್ನಿ ಸೆರಗು ಹಾಸಿ ಕಟ್ಟಿದಳು. ಬಹು ಸಂತಸಗೊಂಡಳು. ಮನೆಗೆ ನಡೆದಳು.




ಹೊನ್ನಿ ಒಡೆಯರ ಬಳಿ ಬೇಡಿಕೊಂಡಳು

ದಾರಿಯಲ್ಲಿ ಇದ್ದಕ್ಕಿದ್ದಂತೆ ಮಾಯದ ಮಳೆಗಾಳಿ ಬೀಸಿತು. ಹಳ್ಳ ಹೊಳೆಯಾಗಿ ಹರಿಯಿತು. ಕೆರೆಬಾವಿ ಎಲ್ಲ ತುಂಬಿ ಉಕ್ಕಿದವು. ಹೊನ್ನಿಗೆ ಏನು ಮಾಡಲೂ ತೋಚಲಿಲ್ಲ. ಈ ಮಳೆಯಲ್ಲಿ ಮನೆಗೆ ಹೋಗುವುದು ಹೇಗೆ? ಉಕ್ಕಿಹರಿವ

ನದಿಯನ್ನು ದಾಟುವುದು ಹೇಗೆ? ಮನೆಯಲ್ಲಿ ಹಸುಮಕ್ಕಳ ಗತಿ ಏನಾಗಿದೆಯೋ? ದುಃಖ ಉಕ್ಕಿ ಬಂತು. ಹೊನ್ನಿ ಧೈರ್ಯ ತಂದುಕೊಂಡಳು. "ನಾನು ಸತ್ಯದ ಮಗಳು ಹೌದಾದರೆ ಈ ಮಾಯದ ಮಳೆಗಾಳಿ ನಿಲ್ಲಬೇಕು. ತುಂಬಿ ಹರಿವ ಹೊಳೆ ಹಳ್ಳವಾಗಬೇಕು. ಉಕ್ಕಿದ ಕೆರೆಬಾವಿ ಆರಬೇಕು"ಎಂದು ಹೇಳಿದಳು. ಮರುಗಳಿಗೆಯಲ್ಲೆ ಮಾಯದ ಮಳೆಗಾಳಿ ಹಾರಿ ಹೋಯಿತು. ತುಂಬಿದ ಹೊಳೆ ಹಳ್ಳವಾಯಿತು. ಉಕ್ಕಿದ ಕೆರೆಬಾವಿ ಆರಿ ಹೋಯಿತು. ಹೊನ್ನಿ ಸಂತಸಗೊಂಡಳು.

ಹೊನ್ನಿ ಮನೆಗೆ ಬಂದಳು. ತಂದ ಬತ್ತವನ್ನು ಒನಕೆಯಲ್ಲಿ ಕುಟ್ಟಿದಳು. ಗೆರಸಿಯಲ್ಲಿ ಗೇರಿದಳು. ಕುಟ್ಟಿ ಮಾಡಿದ ಅಕ್ಕಿಯನ್ನು ಬೇಯಿಸಿ ಗಂಜಿ ಮಾಡಿದಳು. ಅಂಗಳದಲ್ಲಿ ಏಳು ಹೊಂಡ ತೋಡಿದಳು. ಆ ಹೊಂಡದಲ್ಲಿ ಏಳು ಮಕ್ಕಳಿಗೆ ಗಂಜಿ ಬಡಿಸಿದಳು. ಮಕ್ಕಳು ಉಂಡು ಎದ್ದರು. ಹೊನ್ನಿ ಆ ಏಳು ಹೊಂಡಗಳನ್ನು ನೆಕ್ಕಿದಳು. ಅವಳ ಹಸಿವೆ ಹಿಂಗಲಿಲ್ಲ.

ಮುಂದೇನು ಮಾಡುವುದು? ಹೊನ್ನಿ ನಿಂತು ಯೋಚನೆ ಮಾಡಿದಳು. ಕುಳಿತು ಯೋಚನೆ ಮಾಡಿದಳು. ನಾನು ಹೀಗೇ ಕುಳಿತರೆ ದಿನ ಹೋಗದು. ಹಸಿವೆ ಹಿಂಗದು. ಏನಾದರೂ ದುಡಿದು ತರಬೇಕು. ಜಾತಿಯ ಉದ್ಯೋಗ ಮಾಡಬೇಕು ಎಂದುಕೊಂಡಳು.

ಹೊನ್ನಿ ನೇರ ಕಮ್ಮಾರನ ಮನೆಗೆ ಹೋದಳು. ಅಗೆವ, ಕಡಿವ ಸಲಕರಣೆ ಮಾಡಿಕೊಡು ಎಂದಳು. ಆ ಸಲಕರಣೆಗಳನ್ನು ಹೊರೆ ಕಟ್ಟಿ ಹೊತ್ತುಕೊಂಡಳು. ಮೂಡಣ ಕಾಡಿಗೆ ನಡೆದಳು. ಕಾಡಗೆಣಸನ್ನು ಅರಸಿದಳು. ಮುಂದೆ ಮುಂದೆ ನಡೆದಳು. ಹುಲುಸಾಗಿ ಹಬ್ಬಿದ ಕಾಡಗೆಣಸಿನ ಬಳ್ಳಿಯನ್ನು ಕಂಡಳು. ಹಬ್ಬಿದ ಬಳ್ಳಿಯನ್ನೆಲ್ಲ ಕತ್ತಿಯಿಂದ ಕತ್ತರಿಸಿದಳು. ಹಾರೆಯಿಂದ ಮಣ್ಣು ಕಡಿದಳು. ಉದ್ದುದ್ದದ ಬೇರು



ಹೊನ್ನಿಗೆ ಕಳಸ ಕಂಡಿತು

ಕಾಣಿಸಿತು. ಕತ್ತರಿಸಿ ಬದಿಗೆ ಹಾಕಿದಳು. ದೊಡ್ಡ ದೊಡ್ಡ ಕಲ್ಲು ಕಾಣಿಸಿತು. ಕಡಿದು ಬದಿಗೆ ಹಾಕಿದಳು. ಒಂದು ಹಾರೆ ಮಣ್ಣು ತೆಗೆದಳು. ಹೊನ್ನ ಕಳಸ ಮೇಲೆ ಬಂದಿತು. ಎರಡು ಹಾರೆ ಮಣ್ಣು ತೆಗೆದಳು. ಚಿನ್ನ ಕಳಸ ಮೇಲೆ ಬಂದಿತು. ಮೂರು ಹಾರೆ ಮಣ್ಣು ತೆಗೆದಳು. ಮಣ್ಣಕಳಸ ಮೇಲೆ ಬಂದಿತು. ಹೊನ್ನಿಗೆ ದಿಗಿಲಾಯಿತು.

ಓಡಿ ಒಡೆಯರ ಮನೆಗೆ ಬಂದಳು. ಕಾಡಿನಲ್ಲಿ ಕಂಡ ಅಚ್ಚರಿಯನ್ನು ಹೇಳಿದಳು. ಒಡೆಯರು ಭಟ್ಟರಿಗೆ ಹೇಳು ಎಂದರು. ಹೊನ್ನಿ ಭಟ್ಟರ ಮನೆಗೆ

ಓಡಿದಳು. ಕಾಡಿನಲ್ಲಿ ಕಂಡ ಅಚ್ಚರಿಯನ್ನು ಹೇಳಿದಳು. ಭಟ್ಟರು ಹೊನ್ನಿಯ ಜೊತೆಗೆ ಹೊರಟರು. ಒಡೆಯರ ಮನೆಗೆ ಬಂದರು. ಮೂವರೂ ಮೂಡಣ ಕಾಡಿಗೆ ನಡೆದರು.

ಭಟ್ಟರು ಮುಂದೆ, ಬೆನ್ನಿಗೆ ಒಡೆಯರು, ಹೊನ್ನಿ ಹಿಂದಿನಿಂದ ಹೊರಟರು. ಮೂಡಣ ಕಾಡಿಗೆ ಬಂದರು. ಕಳಸಗಳನ್ನು ಕಂಡರು. ಹೊನ್ನಿನ ಕಳಸ ನನಗೆ ಎಂದರು ಭಟ್ಟರು. ಚಿನ್ನದ ಕಳಸ ನನಗೆ ಎಂದರು ಒಡೆಯರು. ಮಣ್ಣಿನ ಕಳಸ ತನಗೆಂದಳು ಹೊನ್ನಿ. ಮೂವರೂ ಕಳಸ ಹೊತ್ತು ಮನೆಗೆ ಬಂದರು.

ಭಟ್ಟರು ಹೊನ್ನ ಕಳಸದ ನಾಗನನ್ನು ಅರಳಿಕಟ್ಟೆಯಲ್ಲಿ ಸ್ಥಾಪಿಸಿದರು. ನಾಗಮಂಡಲ ನಡೆಸಿದರು. ಒಡೆಯರು ಚಿನ್ನ ಕಳಸದ ಸ್ವಾಮಿಯನ್ನು ಮನೆಮುಂದೆ ಸ್ಥಾಪಿಸಿದರು. ಪಾರಾಯಣ ಮಾಡಿಸಿದರು. ಮಣ್ಣಕಳಸದ ಕಾಡ್ಯನನ್ನು ಹೊನ್ನಿ ಕಾಡಿನಲ್ಲಿ ಸ್ಥಾಪಿಸಿದಳು. ಅಜ್ಜ ಬೈದ್ಯನನ್ನು ಕರೆದು ಜಾತಿಯವರನ್ನು, ಕೂಟದವರನ್ನು ಕೂಡಿಸಿದಳು. ಕಾಡ್ಯನಾಟ ಮಾಡಿಸಿದಳು.

## ಕೂಟದ ಕತೆ

ಭೂಲೋಕದಲ್ಲಿ ಕೋಟೆಸುರ ಸ್ವಾಮಿ ಹುಟ್ಟಿದ್ದಾನೆ. ಹುಟ್ಟಿ ಹನ್ನೆರಡು ದಿನವಾಯಿತು. ಮೇಲು ಲೋಕದಲ್ಲಿ ಗೌರಿ ಹುಟ್ಟಿದಳು. ಗೌರಿ ಹುಟ್ಟಿ ವರುಷಗಳು ಕಳೆದವು. ಕೂಸು ಹೆಣ್ಣಾಗಿ ಬೆಳೆದಳು. ಹೆಣ್ಣು ಹೋಗಿ ಹೆಂಗಸಾದಳು. ತಂದೆ ತಾಯಿಯರು ಮಗಳಿಗೆ ಮದುವೆ ಮಾಡಬೇಕು ಎಂದು ಯೋಚಿಸಿದರು.

ಗೌರಿಗೆ ಒಪ್ಪುವ ಗಂಡಾಗಬೇಕಲ್ಲ. ಮೇಲುಲೋಕದ ಸ್ವಯಂವರ ಕರೆಯುವುದು ಎಂದು ನಿರ್ಧರಿಸಿದರು. ಶಾನುಭಾಗನನ್ನು ಕರೆಸಿದರು. ಓಲೆ ಬರೆಸಿದರು. ಎಲ್ಲಾ ದೇವತೆಗಳಿಗೆ ಸ್ವಯಂವರಕ್ಕೆ ಬರುವಂತೆ ಓಲೆ ಕಳುಹಿಸಿದರು.

ಸ್ವಯಂವರಕ್ಕೆ ಸಿದ್ಧತೆ ಆಯಿತು. ಮೇಲುಲೋಕದ ದೇವಾನುದೇವತೆಗಳೆಲ್ಲ ಬಂದರು. ಗೌರಿಯನ್ನು ಸಿಂಗರಿಸಿದರು. ಸಿಂಗಾರಗೊಂಡ ಗೌರಿ ಸ್ವಯಂವರದ ಕೂಟಕ್ಕೆ ಬಂದಳು. ಕೂಟ ಇಡೀ ಸುತ್ತಿ ನೋಡಿದಳು. ಬಂದ ಯಾರೂ ಗೌರಿಗೆ ಹಿತವಾಗಲಿಲ್ಲ. ಕೂಡಿದ ಕೂಟ ಒಲವಿಲ್ಲ ಎಂದು ಹೊರಟುಹೋದಳು. ಕೂಡಿದ ಕೂಟ ಹಾಗೆಯೇ ಹರಿಯಿತು.

ಇನ್ನೇನು ಮಾಡುವುದು? ಭೂಲೋಕದ ಸ್ವಯಂವರ ಕರೆಯುವುದು ಎಂದು ಯೋಚಿಸಿದರು. ಭೂಲೋಕದ ಸ್ವಯಂವರ ಕೂಟ ಕೂಡಿಸಿದರು. ಕೋಟೇಸುರ ಸ್ವಾಮಿ ಮಾತ್ರ ಬರಲಿಲ್ಲ. ಎಲ್ಲ ರಾಜ ಮಹಾರಾಜರು ಕೂಟಕ್ಕೆ ಬಂದರು. ಗೌರಿ ಸಿಂಗಾರಗೊಂಡು ಕೂಟಕ್ಕೆ ಬಂದಳು. ಕೂಟ ಸುತ್ತಿ ಕಂಡಳು. ಬಂದ ಯಾರೂ ಗೌರಿಗೆ ಹಿತವಾಗಲಿಲ್ಲ. ಕೋಟೇಸುರ ಸ್ವಾಮಿ ಬರಬೇಕು ಎಂದಳು. ಸ್ವಾಮಿಗೆ ಕರೆ ಹೋಯಿತು. ಸ್ವಾಮಿ ಕೂಟಕ್ಕೆ ಬಂದರು. ಅತ್ತಿಯ ಹೂವಿನ ಮಾಲೆ ಹಿಡಿದು ಬಂದಳು ಗೌರಿ. ಸ್ವಾಮಿಗೆ ಒಲಿದಳು. ಸ್ವಾಮಿಯ ಕೊರಳಿಗೆ ಹಾರ ಹಾಕಿದಳು. ಸ್ವಾಮಿಗೂ ಗೌರಿಗೂ ಧಾರೆಯಾಯಿತು.

ಕೋಟೇಸುರಸ್ವಾಮಿ ಗೌರಿಯೊಂದಿಗೆ ತಮ್ಮ ಅರಮನೆಗೆ ಬಂದರು. ಕೂಟಕ್ಕೆ ಹೋಗಿ ಮೈಮಾಸಿದೆ. ಗಂಗೆಯಲ್ಲಿ ಸ್ನಾನ ಆಗಬೇಕು ಎಂದರು. ಗೌರಿ ಸ್ವಾಮಿಗೆ ಎಣ್ಣೆ ಉಜ್ಜಿದಳು. ಸ್ವಾಮಿ ಕುದುರೆ ಹತ್ತಿದರು. ಸ್ನಾನಕ್ಕೆ ಹೊರಟರು. ಹೊರಬಾಗಿಲಿಗೆ ಬಂದಾಗ ಬಾಗಿಲ ದಾರಂದ ತಲೆಗೆ ಬಡಿಯಿತು. ಮನೆ ಮುಂದಿನ ಗದ್ದೆಗೆ ಬಂದಾಗ ಅರಳಿಮರ ಬಿದ್ದಿತು. ಏರಿದ ಕುದುರೆ ಮುಗ್ಗರಿಸಿತು. ಅಪಶಕುನವಾಯಿತು. ಸ್ವಾಮಿಗೆ ಆತಂಕವಾಯಿತು. ಮತ್ತೆ ಸಮಾಧಾನ ಮಾಡಿಕೊಂಡರು. ಮುನ್ನಡೆದರು. ಸ್ವಾಮಿ ನದಿ ಬಳಿಗೆ ಬಂದರು. ಅರಳಿ ಎಲೆಯಿಂದ ದೋಣಿ, ಹುಟ್ಟು ಮಾಡಿದರು. ಮಾಯದ

ಅಂಬಿಗಾರನನ್ನು ಮಾಡಿದರು. ಸ್ವಾಮಿ ದೋಣಿಯಲ್ಲಿ ಕುಳಿತರು. ಅಳಿವೆಗೆ ಬಂದರು. ದಾಸಿಯರು ಸ್ವಾಮಿಗೆ ಜಳಕ ಮಾಡಿಸಿದರು. ಸ್ವಾಮಿ ಮಿಂದು ಬಂದರು. ತಮ್ಮ ಜಡೆ ಲೆಕ್ಕ ಮಾಡಿದರು. ಒಂದು ಜಡೆ ಕಾಣಲಿಲ್ಲ.

ಸ್ವಾಮಿ ಮಾಯದ ಅಂಬಿಗಾರನನ್ನು ಕರೆದರು. "ನದಿಯ ಒಳಗೆ ಇಳಿದು ಹೋಗು. ಜಡೆಯ ಸುಳುಹು ಕಂಡು ಬಾ " ಎಂದರು. ಮಾಯದ ಅಂಬಿಗಾರ ನದಿಯ ಒಳಗೆ ಇಳಿದ. ಸ್ವಾಮಿಯ ಜಡೆಯನ್ನು ಕಂಡ. ಆ ಜಡೆಯಲ್ಲಿ ಗಂಗೆ ಇದ್ದಳು. " ಇದು ಸ್ವಾಮಿಯ ಜಡೆ. ಜಡೆ ಬಿಡು" ಎಂದ. "ಇಲ್ಲ, ಸ್ವಾಮಿಯನ್ನು ನಾನು ಮೆಚ್ಚಿ ಹಿಡಿದಿದ್ದೇನೆ. ಜಡೆ ಬಿಡುವುದಿಲ್ಲ " ಎಂದಳು ಗಂಗೆ. ಜಡೆಯಲ್ಲಿ ಅಡಗಿಯೇ ಮೇಲೆ ಬಂದಳು. " ಜಡೆಯಿಂದ ಇಳಿದು ಹೋಗು" ಎಂದರು ಸ್ವಾಮಿ. ಏನು ಹೇಳಿದರೂ ಗಂಗೆ ಕೇಳಲಿಲ್ಲ. ಎಷ್ಟು ಹೇಳಿದರೂ ಗಂಗೆ ಒಪ್ಪಲಿಲ್ಲ. "ನಿಮ್ಮನ್ನು ಮೆಚ್ಚಿ ನಾನು ಬಂದಿದ್ದೇನೆ, ಬಿಡಲಾರೆ" ಎಂದು ಪಟ್ಟು ಹಿಡಿದಳು. "ಅರಮನೆಯಲ್ಲಿ ನನ್ನ ಮಡದಿ ಗೌರಿ ಇದ್ದಾಳೆ. ಅವಳು ಮಹಾ ಸಿಟ್ಟಿನವಳು. ನೀನು ಬಂದರೆ ನಿನ್ನನ್ನು ಹೊಡೆಯುವಳು. ಕಾಲಲ್ಲಿ ನಿನ್ನನ್ನು ಒದೆಯುವಳು. ಪೊರಕೆಯಿಂದ ಹೊಡೆಯುವಳು. ದಯವಿಟ್ಟು ನನ್ನನ್ನು ಬಿಟ್ಟುಹೋಗು" ಎಂದರು. ಏನು ಹೇಳಿದರೂ ಗಂಗೆ ಹಿಡಿದ ಹಟ ಬಿಡಲಿಲ್ಲ.

ಇತ್ತ ಅರಮನೆಯಲ್ಲಿ ಗೌರಿಗೆ ಕನಸು ಬೀಳುತ್ತದೆ. 'ಸ್ವಾಮಿಯ ಜಡೆಯಲ್ಲಿ ಗಂಗೆ ಅಡಗಿದ್ದಾಳೆ' ಎಂದು.

ಸ್ವಾಮಿ ಅರಮನೆಗೆ ಬಂದರು. ಸ್ವಾಮಿಯ ಜಡೆಯಲ್ಲಿ ಅಡಗಿ ಗಂಗೆಯೂ ಬಂದಳು. ಗೌರಿ ಬಾಗಿಲಲ್ಲಿ ಎರಡು ಕಳಸ ಹಿಡಿದು ನಿಂತಳು. ಒಂದು ಹೊನ್ನಿನ

ಕಳಸ, ಇನ್ನೊಂದು ಮಣ್ಣಿನ ಕಳಸ. ಸ್ವಾಮಿ ಬಾಗಿಲಿಗೆ ಬಂದರು. ಗೌರಿ ಹೊನ್ನ ಕಳಸದ ನೀರಿನಿಂದ ಸ್ವಾಮಿಯ ಪಾದ ತೊಳೆದಳು. " ಇದೇನು ಗೌರಿ? ಮಣ್ಣಿನ ಕಳಸ ಯಾರಿಗೆ ? ಸ್ವಾಮಿ ಕೇಳಿದರು. "ನಿಮ್ಮ ಹೆಂಡತಿಗೆ, ನನ್ನ ಸವತಿಗೆ" ಎಂದಳು ಗೌರಿ.

ಗೌರಿ ಸ್ವಾಮಿಯನ್ನು ಕೈ ಹಿಡಿದು ಒಳಗೆ ಕರೆದೊಯ್ದಳು. ಚಿನ್ನದ ಮಣೆಯ ಮೇಲೆ ಕುಳ್ಳಿರಿಸಿದಳು. ಆಳುಗಳನ್ನು, ದಾಸಿಯರನ್ನು ಕರೆದಳು. "ಸ್ವಾಮಿಯ ತಲೆಬಾಚಬೇಕು. ಗಿಂಡಿಯಲ್ಲಿ ಎಣ್ಣೆ ಸಿದ್ಧಮಾಡಿ.ಬಣ್ಣದ ಬಾಚಣಿಗೆ ತನ್ನಿ. ಚಿನ್ನದ ಸೀರಣಿಗೆ ತಂದಿಡಿ " ಎಂದಳು. ದಾಸಿಯರು ಎಲ್ಲವನ್ನೂ ಸಿದ್ಧಗೊಳಿಸಿದರು. ಗೌರಿ ಸ್ವಾಮಿಯ ಜಡೆಯೊಳಗೆ ಎಣ್ಣೆ ಹಚ್ಚಿದಳು. ಒಂದೊಂದೇ ಜಡೆಯನ್ನು ಬಾಚಿದಳು. ಜಡೆಯಲ್ಲಿ ಅಡಗಿದ್ದ ಗಂಗೆ ಹಣ್ಣಡಕೆಯಾಗಿ ಕೆಳಗೆ ಬಿದ್ದಳು. ಗೌರಿಗೆ ಸಿಟ್ಟು ತಡೆಯಲಾಗಲಿಲ್ಲ. ಕತ್ತಿಮಣೆ ತರಿಸಿದಳು. ಹಣ್ಣಡಕೆಯನ್ನು ಒಡೆದಳು. ಅಷ್ಟರಲ್ಲಿ ಗಂಗೆ ಮಾಯವಾದಳು. ಮತ್ತೆ ಸ್ವಾಮಿಯ ಜಡೆ ಸೇರಿದಳು. ಗೌರಿಯೂ ಬಿಡಲಿಲ್ಲ. ಮತ್ತೆ ಸ್ವಾಮಿಯ ಜಡೆ ಬಾಚಿದಳು. ಗಂಗೆ ಲಿಂಬೆಯ ಹಣ್ಣಾಗಿ ಬಿದ್ದಳು. ಗೌರಿಗೆ ಕೋಪ ಇನ್ನಷ್ಟು ಹೆಚ್ಚಿತು. ಗಂಗೆ ಲಿಂಬೆಯ ಹಣ್ಣಾಗಿ ಬಿದ್ದಳು. ಗೌರಿಗೆ ಕೋಪ ಇನ್ನಷ್ಟು ಹೆಚ್ಚಿತು. ಲಿಂಬೆಯ ಹಣ್ಣನ್ನು ಕತ್ತಿಯಿಂದ ಕತ್ತರಿಸಿದಳು. ಒಡೆದ ಲಿಂಬೆಹಣ್ಣಿನಿಂದ ಗಂಗೆ ಎದ್ದುನಿಂತಳು. ಎದ್ದುನಿಂತ ಗಂಗೆ ಅಕ್ಕನಿಗೆ ಕೈ ಮುಗಿದಳು. ಅಕ್ಕಾ ಗೌರಿ, ಕೇಳಕ್ಕ ಕೇಳು " ಒಬ್ಬರು ಹಾಕುವ ಚಿನ್ನ, ಇಬ್ಬರು ಕೂಡಿ ಹಾಕುವ. ಒಬ್ಬರು ಉಡುವ ಸೀರೆಯನ್ನು, ಇಬ್ಬರು ಉಡುವ. ಒಂದು ದಿನದ ಎಂಜಲು ನೀನು ತೆಗೆ. ಒಂದು ದಿನದ ಎಂಜಲು ನಾನು ತೆಗೆಯುತ್ತೇನೆ. ಇಬ್ಬರೂ ಪ್ರೀತಿಯಿಂದ ಕೂಡಿ ಬಾಳುವ. ಒಂದೇ ಗಂಡನ ಜತೆ ಸಮಬಾಳು ನಡೆಸುವ" ಎಂದು ಬೇಡಿದಳು.

ಗೌರಿಗೆ ಸಿಟ್ಟು ತಡೆಯಲು ಆಗಲಿಲ್ಲ. ಗಂಡನ ಪ್ರೀತಿಯಲ್ಲಿ ಪಾಲು ಕೇಳ ಬಂದ ಸವತಿಯನ್ನು ಕಂಡು ಮೈ ಎಲ್ಲಾ ಉರಿಯಿತು. ಕೋಪ ಉಕ್ಕಿತು. ಕಾಲಿನಿಂದ ಗಂಗೆಯನ್ನು ತುಳಿದಳು. ಪೊರಕೆಯಿಂದ ಹೊಡೆದಳು. ಗಂಗೆಗೂ ಸಹನೆ ತಪ್ಪಿತು. ಕೋಪ ಕುದಿಯಿತು. " ನಿನ್ನ ಸವತಿಯನ್ನು ನಿನ್ನ ಕೈಯಲ್ಲಿ ತೊಳೆಸುತ್ತೇನೆ ನೋಡು, ಇಲ್ಲವಾದಲ್ಲಿ ನಾನು ಗಂಗೆಯೇ ಅಲ್ಲ " ಎಂದು ಶಪಥ ಮಾಡಿದಳು. ಅದರಂತೆ ಜಲದೇವತೆ ಗಂಗೆ ಭೂಮಿಯ ನೀರನ್ನು ಆರಿಸಿದಳು. ನೀರಿನ ನೆಲೆಯನ್ನು ಕಟ್ಟಿದಳು. ಒಸರಿನ ದಾರಿಯನ್ನು ಮುಚ್ಚಿದಳು. ಪಾತಾಳಕ್ಕೆ ಇಳಿದು ಹೋದಳು.

ಕೆಲವು ದಿನ ಕಳೆಯಿತು. ಗೌರಿ ಮುಟ್ಟಾದಳು. ನಾಲ್ಕನೆ ದಿನ ಬಂತು. ಮಿಂದು ಮಡಿಯಾಗಲು ನದಿಗೆ ಹೋದಳು. ನದಿಯಲ್ಲಿ ಹನಿ ನೀರಿಲ್ಲ. ಕಡಲು ಬತ್ತಿ ಬರಿದಾಗಿದೆ. ಆದರೂ ಗೌರಿ ಎದೆಗೆಡಲಿಲ್ಲ. ಹೊಸಯೋಚನೆ ಮಾಡಿದಳು. ಎಮ್ಮೆಗಳನ್ನು ತಂದಳು. ಹಾಲು ಕರೆದಳು. ಕೊಪ್ಪರಿಗೆ ತುಂಬಿದಳು. ಆ ಹಾಲಲ್ಲಿ ಮಿಂದು ಬಂದಳು. ಇದನ್ನು ಸ್ವಾಮಿ ಕಂಡರು. "ಹಾಲಲ್ಲಿ ಮಿಂದು ಬಂದರೆ ಮಡಿಯಾಗದು. ಸೂತಕ ಕಳೆಯದು. ಅರಮನೆಯೊಳಗೆ ಬರಬೇಡ " ಎಂದು ತಡೆದರು.

ಗೌರಿಗೆ ದಾರಿ ಕಾಣಲಿಲ್ಲ. ಏನು ಮಾಡುವುದು ? ನೇರ ನೀರಿನಣ್ಣನ ಮನೆಗೆ ಹೋದಳು. "ಅನುಪಣ್ಣ, ಅನುಪಣ್ಣ" ಎಂದು ಕರೆದಳು. "ಗಂಗೆ ಸಿಟ್ಟಿನಿಂದ ಇಳಿದು ಹೋಗಿದ್ದಾಳೆ. ನಾನು ಮಿಂದು ಮಡಿಯಾಗಬೇಕು. ಸೂಜಿಯ ಗಾತ್ರದ ನೀರು ಬಿಡಣ್ಣ" ಎಂದು ಬೇಡಿದಳು. "ಇಲ್ಲ, ನೀರು ಬಿಡಲು ನನ್ನಿಂದ ಆಗದು. ನಾನು ನೀರು ಬಿಟ್ಟರೆ ಗಂಗೆ ನನ್ನನ್ನು ಹೊಡೆಯುವಳು. ನಿನ್ನನ್ನು ಬಯ್ಯುವಳು " ಎಂದ.

ಗೌರಿ ಅಲ್ಲಿಂದ ಹೊರಟಳು. ನೀರಿನಜ್ಜನ ಮನೆಗೆ ಬಂದಳು. ನೀರಜ್ಜ, ನೀರಜ್ಜ ಎಂದು ಕರೆದಳು.

"ಗಂಗೆ ಸಿಟ್ಟಿನಿಂದ ಇಳಿದು ಹೋಗಿದ್ದಾಳೆ. ನಾನು ಮಿಂದು ಮಡಿಯಾಗಬೇಕು. ನೂಲಿನ ಗಾತ್ರದ ನೀರು ಬಿಡಜ್ಜ " ಎಂದು ಬೇಡಿದಳು. " ಇಲ್ಲ, ನೀರು ಬಿಡಲು ಆಗದು. ನಾನು ನೀರು ಬಿಟ್ಟರೆ ಗಂಗೆ ನನ್ನನ್ನು ಹೊಡೆಯುವಳು, ನಿನ್ನನ್ನು ಬಯ್ಯುವಳು " ಎಂದ.

ಗೌರಿ ಸಿಟ್ಟಿನಿಂದ ನಡುಗಿದಳು. "ತಲೆಬಾಗಿ ತಂಗಿ ಗಂಗೆಯಲ್ಲಿ ಕೇಳು. ತಪ್ಪನ್ನು ಒಪ್ಪಿಕೋ " ಸ್ವಾಮಿ ಮಡದಿಗೆ ಬುದ್ಧಿ ಹೇಳಿದರು. ಗೌರಿಗೆ ತಿಳಿವು ಮೂಡಿತು. ಸವತಿ ಗಂಗೆಯೊಂದಿಗೆ ಹೊಂದಿ ಬಾಳುವುದೇ ಸರಿ ಎನಿಸಿತು.

ಗೌರಿ ಗಂಗೆಯಲ್ಲಿಗೆ ನಡೆದಳು. "ತಂಗೀ, ನಾವು ಅಕ್ಕತಂಗಿಯರು ಒಂದಾಗಿ ಹೊಂದಿಬಾಳುವ. ಒಬ್ಬರು ಉಡುವ ಬಟ್ಟೆ ಇಬ್ಬರು ಉಡುವ. ಒಬ್ಬರು ಇಡುವ ಚಿನ್ನ ಇಬ್ಬರು ಹಾಕುವ. ಒಬ್ಬರು ಇಡುವ ಬಳೆ ಇಬ್ಬರು ಇಡುವ. ಒಬ್ಬ ಗಂಡನಿಗೆ ಕೂಡಿ ಬಾಳುವ " ಎಂದು ಬೇಡಿಕೊಂಡಳು. ಗಂಗೆಯ ಮನಸ್ಸು ಕರಗಿತು. ಸಿಟ್ಟು ಇಳಿಯಿತು. ನದಿ ಕಡಲಲ್ಲಿ ತುಂಬಿ ಹರಿದಳು. ಗೌರಿ ತುಂಬಿದ ನದಿಯಲ್ಲಿ ಮಿಂದು ಮಡಿಯಾದಳು. ಅಕ್ಕ ತಂಗಿ ಸ್ವಾಮಿಯೊಂದಿಗೆ ಒಂದಾಗಿ ಒಪ್ಪಾಗಿ ಇದ್ದರು.

## ರಣಸಿರಿ ಕತೆ

ನಾರಾಯಣ ಸ್ವಾಮಿ, ರಣಸಿರಿದೇವಿ ವಾಸವಾಗಿದ್ದರು. ವಾಯುವಿಹಾರ ಹೊರಟು ಬಂದರು. ಅರಳಿಕಟ್ಟೆಯಲ್ಲಿ ಕುಳಿತು ಕವಡೆ ಆಡಿದರು. ಆಟ ನೋಡಲು ದೇವಾನುದೇವತೆಗಳೆಲ್ಲ ಬಂದರು. ಸ್ವಾಮಿ–ದೇವಿ ಚಿಗುರಾದ ಸುಳಿವೀಳ್ಯ ಮೆದ್ದರು. ಸಲ್ಲಾಪ ಆಡಿದರು. ಅಲ್ಲಿ ಕೂಡಿದರು.



**ರಣಸಿರಿದೇವಿ ಹೆಣ್ಣುಮಗು ಹಡೆದಳು**

ರಣಸಿರಿದೇವಿಗೆ ಮುಟ್ಟು ನಿಂತಿತು. ಬಸುರು ಬಂದಿತು. ತಿಂಗಳು ತಿಂಗಳಿಗೆ ಬಸುರಿಯ ಮೈಕಾಂತಿ ತುಂಬಿ ಬಂದಿತು. ಹತ್ತು ತಿಂಗಳು ತುಂಬಿತು. ಬೇನೆ ಕಾಣಿಸಿತು. ನಡುಹಗಲಲ್ಲಿ ಹಡೆದಳು. ಹೆಣ್ಣುಮಗು ಹುಟ್ಟಿತು.

ರಣಸಿರಿದೇವಿ ನಾರಾಯಣಸ್ವಾಮಿಯನ್ನು ಕರೆದಳು. ಮಗು ಹುಟ್ಟಿದ ಗಳಿಗೆ ಕೇಳಿ ಬನ್ನಿ ಎಂದಳು. ನಾರಾಯಣಸ್ವಾಮಿ ಜೋಯಿಸರಲ್ಲಿಗೆ ನಡೆದರು. ಮಗು ಹುಟ್ಟಿದ ಗಳಿಗೆ ಕಾಣಬೇಕು ಎಂದರು. ಜೋಯಿಸರು ಮಿಂದು ಮಡಿ ಉಟ್ಟರು. ಮಣೆಯಲ್ಲಿ ಕುಳಿತರು. ಕವಡೆ ಇಟ್ಟು ಲೆಕ್ಕ ಮಾಡಿದರು.

"ಮಗು ಹುಟ್ಟಿದ ಗಳಿಗೆ ವಿಷ ಗಳಿಗೆ. ಅಮವಾಸೆ ಬೂದಿ. ಮಗು ಎದ್ದು ಹರೆಯುವಾಗ, ಅಂಬೆಗಾಲು ಇಡುವಾಗ ತಾಯಿಗೆ ಮರಣ. ಎದ್ದು ಕುಳಿತುಕೊಳ್ಳುವಾಗ ತಂದೆಗೆ ಮರಣ" ಎಂದು ಫಲ ಹೇಳಿದರು. ವಿಷಯ ಕೇಳಿ ಸ್ವಾಮಿ–ದೇವಿ ಇಬ್ಬರೂ ಮೂರ್ಛೆ ಹೋದರು. "ಮಕ್ಕಳಿಲ್ಲ ಎಂದು ಮರುಗಿದೆ. ಕೊಡು ಎಂದು ಬೇಡಿದೆ. ವರ ಪಡೆದು ಮಗುವನ್ನು ಹಡೆದೆ. ಹಡೆದ ಕೂಸನ್ನು ಕಂಡು ಎಷ್ಟು ಸಂತೋಷಗೊಂಡೆ. ಹರ ಹರ, ಶಿವ ಶಿವಾ" ಎಂದು ಗೋಳಾಡಿದಳು ರಣಸಿರಿದೇವಿ.

ಇನ್ನೇನು ಮಾಡುವುದು ? ನಾಲ್ಕು ದಿಕ್ಕಿನ ದೇವತೆಗಳನ್ನೆಲ್ಲ ಕರೆಸಿದರು, ಕೇಳಿದರು. ಮಗುವನ್ನು ದಾನ ಕೊಡುವುದು ಎಂದು ನಿಶ್ಚಯ ಮಾಡಿದರು.

ಬಡಗಿಯನ್ನು ಕರೆಸಿದರು. ಅರಳಿಮರ ಕಡಿಸಿದರು. ಅದರಿಂದ ದೊಡ್ಡ ಪೆಟ್ಟಿಗೆ ಮಾಡಿಸಿದರು. ಪೆಟ್ಟಿಗೆಯಲ್ಲಿ ಹನ್ನೆರಡು ಕೋಣೆ ಮಾಡಿಸಿದರು. " ಮಗುವನ್ನು ಗಂಗೆಗೆ ದಾನ ಕೊಡುತ್ತೇವೆ. ನೀವು ಬರಬೇಕು " ಎಂದು ಊರೂರು ಡಂಗುರ ಹೊಡೆಸಿದರು. ನಾಲ್ಕು ದಿಕ್ಕಿನ ದೇವತೆಗಳಿಗೆ ಕರೆ ಕಳುಹಿಸಿದರು. ಎಲ್ಲರೂ ಬಂದು ಕೂಡಿದರು. ಪೆಟ್ಟಿಗೆ ಸಿಂಗಾರ ಮಾಡಿದರು. ಹನ್ನೊಂದು ಕೋಣೆಗೆ ಸಾಮಾನು ತುಂಬಿದರು. ಒಂದು ಕೋಣೆಯಲ್ಲಿ ಮಗುವನ್ನು ಇರಿಸಿದರು. ದೇವತೆಗಳು ಪೆಟ್ಟಿಗೆಗೆ ಪೂಜೆ ಮಾಡಿದರು. ಗಂಗೆಯಲ್ಲಿ ತೇಲಿಬಿಟ್ಟರು.



ನದಿಯಲ್ಲಿ ಪೆಟ್ಟಿಗೆ ತೇಲುತ್ತ ಹೋಯಿತು. ನದಿಮಧ್ಯದಲ್ಲಿ ಮುಳುಗಿತು. ಅಲ್ಲಿ ಮುನಿಗಳು ತಪಸ್ಸು ಮಾಡುತ್ತಿದ್ದರು. ಪೆಟ್ಟಿಗೆಯ ಹಿಡಿ ಅವರ ಜಡೆಗೆ ಸಿಕ್ಕಿಕೊಂಡಿತು. ಮುನಿಗಳು ಮಾಯದ ಅಂಬಿಗಾರನನ್ನು ಮಾಡಿದರು. ಜಡೆಗೆ ಸಿಕ್ಕಿದ ಪೆಟ್ಟಿಗೆಯನ್ನು ತಾ ಎಂದರು. ಮಾಯದ ಅಂಬಿಗಾರ ಪೆಟ್ಟಿಗೆಯನ್ನು ಹಿಡಿದ. ದಡಕ್ಕೆ ಎಳೆದುತಂದ.

ಮುನಿಗಳು ಪೆಟ್ಟಿಗೆಯನ್ನು ಒಡೆಸಿದರು. ಏನು ನೋಡುವುದು. ಸುಂದರ ಹೆಣ್ಣುಮಗು ! ಮುನಿಗಳಿಗೆ ಅಚ್ಚರಿ, ಸಂತೋಷ. ಮಗು ಮೂರು ಸೀನು ಸೀನಿತು. ಹೀಗಾಗಿ ಮಗುವಿಗೆ ಸೀತೆ ಎಂದು ಹೆಸರಿಟ್ಟರು. ಸೀತೆ ಬೆಳೆದು ದೊಡ್ಡವಳಾದಳು. ಚೆಲುವು ತುಂಬಿ ಬೆಳೆದಳು. ಅವಳಿಗೆ ಮದುವೆ ಮಾಡಬೇಕು ಎಂದು ಮುನಿಗಳು ಬಯಸಿದರು. ಸೀತೆಗೆ ಒಪ್ಪುವ ಗಂಡನಾಗಬೇಕಲ್ಲ. 'ಬಿಲ್ಲುಹಬ್ಬ' ಮಾಡಬೇಕೆಂದು ನಿರ್ಧರಿಸಿದರು. ಭೂಮಿ ಭಾರದ ಬಿಲ್ಲು ಮಾಡಿಸಿದರು. ಆ ಬಿಲ್ಲನ್ನು ಎತ್ತಿ ಬಾಣ ಹೊಡೆದವರಿಗೆ ಸೀತೆಯನ್ನು ಧರ್ಮಧಾರೆ ಎರೆದು ಕೊಡುತ್ತೇವೆ ಎಂದು ಡಂಗುರ ಹೊಡೆಸಿದರು.

ಬಿಲ್ಲುಹಬ್ಬಕ್ಕೆ ದಿನ ಇಟ್ಟರು. ನಾಲ್ಕು ದಿಕ್ಕಿನಿಂದ ಎಲ್ಲ ದೇವತೆಗಳು ಬಂದರು. ಸುತ್ತಿನ ದೇಶಗಳ ರಾಜಾಧಿರಾಜರು ಬಂದರು. ಎಲ್ಲರಿಗೂ ಸೀತೆಯನ್ನು ಮದುವೆ ಆಗುವ ಕನಸು, ಆಸೆ. ಆದರೆ ಬಂದವರು ಆ ಬಿಲ್ಲುಬಾಣವನ್ನು ಕಂಡೇ ಹೆದರಿದರು. ಓಡಿಹೋದರು.

ಪಡುಲಂಕೆಯಲ್ಲಿ ರಾವಣ ಎಂಬವನಿದ್ದ. ರಾವಣನಿಗೆ ಕನಸು ಬೀಳುತ್ತದೆ. ಸೀತೆಗೆ ಬಿಲ್ಲು ಹಬ್ಬ ಮಾಡುತ್ತಿದ್ದಾರೆ ಎಂದು. "ನನ್ನ ಶಕ್ತಿಗೆ ಅದೇನು ಮಹಾ ? ಆ ಬಿಲ್ಲು ಎತ್ತಿ ಬಾಣ ಹೊಡೆದೇ ಹೊಡೆಯುತ್ತೇನೆ. ಸೀತೆಯನ್ನು ಮದುವೆಯಾಗಿ ತರುತ್ತೇನೆ" ಎಂದು ಉಬ್ಬಿದ. ಬಿಲ್ಲುಹಬ್ಬಕ್ಕೆ ಬಂದ.

ಇತ್ತ ಸೀತೆಗೆ ಸ್ವಪ್ನ ಬೀಳುತ್ತದೆ. ಪಡುಲಂಕೆಯ ರಾವಣ ಬರುತ್ತಿದ್ದಾನೆ ಎಂದು. "ರಾವಣ ಬಂದು ಬಾಣಕ್ಕೆ ಕೈ ಇಟ್ಟರೆ ಅವನು ಮುಗ್ಗರಿಸಿ ಬೀಳಬೇಕು. ಅವನ ಹಲ್ಲು ಮುರಿದು ಹೋಗಬೇಕು. ಕಾಲು ತುಂಡಾಗಬೇಕು " ಎಂದು ಶಾಪ ಕೊಡುತ್ತಾಳೆ.

ಬಿಲ್ಲು ಹಬ್ಬಕ್ಕೆ ರಾವಣ ಬಂದ. ಸೀತೆಯನ್ನು ಸಿಂಗರಿಸಿ ಕುಳ್ಳಿರಿಸಿದ್ದಾರೆ. ಅವನ ಮುಂದೆ ಭಾರಿ ಬಿಲ್ಲು ಬಾಣ ಇರಿಸಿದ್ದಾರೆ. ರಾವಣ ಬಿಲ್ಲನ್ನು ಎತ್ತಲು ಬಗ್ಗಿದ. ಅಲ್ಲೇ ಮುಗ್ಗರಿಸಿ ಬಿದ್ದ. ಅವನ ಹಲ್ಲು ಮುರಿಯಿತು. ಕಾಲು ತುಂಡಾಯಿತು. ರಾವಣ ಭಯದಿಂದ ಹೆದರಿ ಓಡಿಹೋದ.

ರಾಮ ಲಕ್ಷ್ಮಣ ಅಣ್ಣತಮ್ಮಂದಿರು. ಸೀತೆಯ ಬಿಲ್ಲು ಹಬ್ಬದ ಬಗೆಗೆ ಕುಳಿತು ಮಾತಾಡುವರು. ರಾಮ ಹೇಳಿದ. "ಲಕ್ಷ್ಮಣ, ಬಿಲ್ಲು ಹಬ್ಬಕ್ಕೆ ನಾವು ಹೋಗಬೇಕು. ಆದರೆ ಆ ಬಿಲ್ಲು ಸಾಮಾನ್ಯ ಬಿಲ್ಲಲ್ಲ. ಅದನ್ನು ಎತ್ತಿ ಹೊಡೆಯಲು ಹನ್ನೆರಡು ವರುಷ ಉಪವಾಸ ಮಾಡಿರಬೇಕು. ಆಗ ಲಕ್ಷ್ಮಣ ಹೇಳಿದ "ಅಣ್ಣಾ, ಚಿಂತೆ ಮಾಡಬೇಡಣ್ಣ. ಆ ಬಾಣ ನನಗೆ. ಹೆಣ್ಣು ನಿಮಗೆ. ನಾನು ಹಸಿವೆಗೆ ಹಣ್ಣು ತಿನ್ನಲಿಲ್ಲ. ಆಸರಿಗೆ ಹಾಲು ಕುಡಿಯಲಿಲ್ಲ. ಹನ್ನೆರಡು ವರುಷ ಉಪವಾಸ ಇದ್ದೇನೆ " ಎಂದ. ಬಾಯಿ ತೆರೆದು ತೋರಿದ. ಗಂಟಲಲ್ಲಿ ಹೊನ್ನ ಬಣ್ಣದ ಜೇಡನ ಬಲೆ ಕಟ್ಟಿದೆ ! ರಾಮ ಅಚ್ಚರಿಗೊಂಡ. "ಇಷ್ಟು ವರುಷ ಯಾಕೆ ಉಪವಾಸ ಇದ್ದೆ ತಮ್ಮಾ " ಎಂದು ಕೇಳಿದ. "ನೀವಾಗಿ ಕೊಡಲಿಲ್ಲ, ನಾನಾಗಿ ತಿನ್ನಲಿಲ್ಲ" ಲಕ್ಷ್ಮಣ ನುಡಿದ.

ರಾಮಲಕ್ಷ್ಮಣರು ಬ್ರಾಹ್ಮಣ ವೇಷ ತೊಟ್ಟರು. ಬಿಲ್ಲು ಹಬ್ಬಕ್ಕೆ ಹೊರಟರು. ದಾರಿಯಲ್ಲಿ ಎದುರಿನಿಂದ ರಾವಣ ಬರುತ್ತಿದ್ದ. ಇವರನ್ನು ತಡೆದ. "ಮಾಣಿಗಳೆ, ಎಲ್ಲಿಗೆ ಹೊರಟಿದ್ದೀರಿ ? ಎಲ್ಲಿಂದ ಬರುತ್ತಿದ್ದೀರಿ?" ಎಂದು ಕೇಳಿದ. " ನಾವು ಬಿಲ್ಲು ಹಬ್ಬಕ್ಕೆ ಹೊರಟಿದ್ದೇವೆ. ಆ ಬಿಲ್ಲನ್ನು ಎತ್ತಿ ಬಾಣ ಹೂಡುತ್ತೇವೆ. ಸೀತೆಯನ್ನು ಧಾರೆ ಎರೆಸಿ ತರುತ್ತೇವೆ" ಎಂದರು. " ನೀವು ಬಿಲ್ಲು ಹಬ್ಬಕ್ಕೆ ಹೋಗಬೇಕಾದರೆ ಮೊದಲು ನನ್ನ ಬಾಣವನ್ನು ನೀವು ಎತ್ತಬೇಕು. ಅದು ನಿಮ್ಮಿಂದ ಆಗದು. ಬಂದ ದಾರಿಯಲ್ಲಿ ಹಿಂದೆ ಹೋಗಿ. ಹೆಚ್ಚಿಗೆ ಮಾತಾಡಬೇಡಿ" ಎಂದ. ಲಕ್ಷ್ಮಣನಿಗೆ ಸಿಟ್ಟು ಬರುತ್ತದೆ. ಎಡಗಾಲಿನ ಬೆರಳಿನಿಂದ ರಾವಣನ ಬಾಣವನ್ನು. ತುಳಿದ . ಅದು ಏಳು ಸಮುದ್ರದ ಆಚೆಗೆ ಕೀಳು ಸಮುದ್ರಕ್ಕೆ ಹೋಗಿ ಬೀಳುತ್ತದೆ. " ನನಗೆ ಸ್ವಾಮಿ ಎಂದು ತಿಳಿಯಲಿಲ್ಲ. ತಪ್ಪು ಮಾಡಿದೆ. ಮನ್ನಿಸಬೇಕು. ನನ್ನ

ಬಾಣವನ್ನು ನನಗೆ ತರಿಸಿಕೊಡಬೇಕು " ಎಂದು ರಾವಣ ಬೇಡಿಕೊಂಡ. ಮಂತ್ರ ಶಕ್ತಿಯಿಂದ ಅವನ ಬಾಣವನ್ನು ತರಿಸಿಕೊಟ್ಟರು. ರಾಮಲಕ್ಷ್ಮಣರು ಮುನ್ನಡೆದರು.



ರಾಮ ಲಕ್ಷ್ಮಣ ಸೀತೆ

ರಾಮಲಕ್ಷ್ಮಣರು ಬಿಲ್ಲು ಹಬ್ಬಕ್ಕೆ ಬಂದರು. ಲಕ್ಷ್ಮಣ ಬಿಲ್ಲನ್ನು ಎತ್ತಿದ. ಬಾಣವನ್ನು ಹೊಡೆದ. ಮಾತಿನಂತೆ ಸೀತೆಯನ್ನು ರಾಮನಿಗೆ ಧರ್ಮಧಾರೆ ಎರೆದರು. ಸೀತೆಯನ್ನು ಕರೆದುಕೊಂಡು ರಾಮಲಕ್ಷ್ಮಣರು ಹಿಂದಿರುಗಿದರು.

# ಯುಗ ಮಗುಚುವ ಕತೆ

ಗಂಗೆ ಯುಗವೊಂದು ಕಳೆದು ಯುಗವನ್ನು ತೋರುತ್ತಾಳೆ. ಲೋಕದಲ್ಲಿ ಅನ್ಯಾಯ ಹೆಚ್ಚಿದಾಗ ಯುಗ ಉರುಳುತ್ತದೆ. ಆಗ ಭೂವಿಯಲ್ಲಿ ವಿಚಿತ್ರಗಳು ನಡೆಯುತ್ತವೆ. ಕಲ್ಲು ಆಮೆ ಎದ್ದು ತೇಲುತ್ತದೆ. ಕಲ್ಲು ಕೋಳಿ ಎದ್ದು ಕೂಗುತ್ತದೆ. ಕಲ್ಲು ಬಸವ ಎದ್ದು ಗುಟುರು ಹಾಕುತ್ತದೆ. ಬೆಣಚು ಕಲ್ಲು ಎದ್ದು ತೇಲುತ್ತದೆ. ಬೆಣ್ಣೆಯ ಉಂಡೆ ಮುಳುಗುತ್ತದೆ. ರಾವುನ ಬಿಸಿಲು ಭೂಮಿಗೆ ಬೀಳುತ್ತದೆ. ವಿಷದ ಗಾಳಿ ಬೀಸುತ್ತದೆ. ಪಚ್ಚೆಯ ಮಳೆ ಸುರಿಯುತ್ತದೆ. ನೀಲದ ಮಳೆ ಹೊಡೆಯುತ್ತದೆ. ಚಿನ್ನದ ಮಳೆ ಬೀಳುತ್ತದೆ. ತಾಮ್ರದ ಮಳೆ ಇಳಿಯುತ್ತದೆ. ಮುತ್ತಿನ ಮಳೆ ಹೊಯ್ಯುತ್ತದೆ. ಕೆಂಡದ ಮಳೆ ಬರುತ್ತದೆ. ಆಗ ಹೆತ್ತತಾಯಂದಿರೆ ಮಕ್ಕಳನ್ನು ಅದಕ್ಕೆ ಒಡ್ಡುತ್ತಾರೆ. ಹೆಂಡತಿಯರೆ ಗಂಡರನ್ನು ಅದಕ್ಕೆ ಹಿಡಿಯುತ್ತಾರೆ. ಆಗೆಲ್ಲ ಗಂಗೆ ಯುಗವನ್ನು ಉರುಳಿಸುತ್ತಾಳೆ. ಹೊಸಯುಗವೊಂದು ಬರುತ್ತದೆ.

ಗಂಗೆ ಉಕ್ಕಿ ಬಂದಿದ್ದಾಳೆ. ಹೀಗೆ ಯುಗವೊಂದು ಉರುಳಿದೆ. ಭೂಲೋಕವೆಲ್ಲ ನೀರಿನಿಂದ ತುಂಬಿಕೊಂಡಿದೆ. ಭೂಮಿಯ ಮೇಲೆ ಎಲ್ಲೆಲ್ಲೂ ನೀರು. ದೈವ ದೇವರುಗಳಿಗೆ ಪೂಜೆ ಇಲ್ಲ. ಹೀಗೇ ಏಳು ರಾತ್ರಿ, ಏಳು ಹಗಲು ಕಳೆದವು.

ಮೇಲುಲೋಕದಲ್ಲಿ ನಾರಾಯಣ ಸ್ವಾಮಿ ಭೂಲೋಕ ಕಂಡರು. ಭೂಮಿ ಮೇಲೆಲ್ಲ ಮಾನವ ಕುಲವೇ ನಾಶವಾಗಿದೆ. ಭೂಮಿ ಮೇಲೆಲ್ಲ ನೀರು ತುಂಬಿದೆ. ದೈವ ದೇವರಿಗೆಲ್ಲ ಪೂಜೆ ಇಲ್ಲದಾಗಿದೆ. ಎಲ್ಲೆಲ್ಲೂ ನೀರು ತುಂಬಿದೆ. ತುಂಬಿದ ನೀರಲ್ಲಿ ಒಂದು ಹೊನ್ನಮದ್ದಳೆ ತೇಲುತ್ತಿದೆ ! ನಾರಾಯಣ ದೇವರಿಗೆ ಅಚ್ಚರಿಯಾಯಿತು.

ಸ್ವಾಮಿ ಮಾಯದ ಅಂಬಿಗಾರನನ್ನು ಮಾಡಿದರು. ಮಾಯದ ದೋಣಿ, ಹುಟ್ಟು ಮಾಡಿಕೊಟ್ಟರು. ' ಈ ದೋಣಿಯಲ್ಲಿ ಹೋಗಿ ಆ ಮದ್ದಳೆಯನ್ನು ಹಿಡಿದು

ತಾ' ಎಂದರು. ಮಾಯದ ಅಂಬಿಗಾರ ದೋಣಿಯಲ್ಲಿ ಕುಳಿತು ಹುಟ್ಟು ಹಿಡಿದ. ದೋಣಿ ಒತ್ತಿದ. ಹೊನ್ನಮದ್ದಳೆ ಹಿಡಿದು ತಂದ. ನಾರಾಯಣಸ್ವಾಮಿಯ ಮುಂದೆ ಇರಿಸಿದ.

ನಾರಾಯಣಸ್ವಾಮಿ ಮದ್ದಳೆಯನ್ನು ಒಡೆಸಿದರು. ಅದರಿಂದ ಬತ್ತಲೆಯಾದ ಕೊರಗ ಗಂಡು ಹೆಣ್ಣು ಎದ್ದುನಿಂತರು. "ಯಾರು ನೀವು?" ನಾರಾಯಣಸ್ವಾಮಿ ಕೇಳಿದರು. "ನಾವು ಅಣ್ಣ ತಂಗಿ" ಎಂದರು ಕೊರಗರು. ನಾರಾಯಣಸ್ವಾಮಿ ಅವರಿಗೆ ಸೊಪ್ಪು ಉಡಿಸಿ, ರೂಪ ಬದಲಾಯಿಸಿದರು. "ಇನ್ನು ನೀವು ಗಂಡ ಹೆಂಡಿರು -ಕೊರಗ-ಕೊರಗಿಯರು. ಭೂಲೋಕದಲ್ಲಿ ಪ್ರಳಯವಾಗಿದೆ. ಯುಗ ಉರುಳಿದೆ. ಮನುಷ್ಯ ಸಂತಾನವೇ ನಾಶವಾಗಿದೆ. ದೇವರಿಗೆ ಪೂಜೆ ಇಲ್ಲದಾಗಿದೆ. ನೀವು ಈಗ ಅಲ್ಲಿಗೆ ಹೋಗಬೇಕು. ನೂರೊಂದು ಕುಲವನ್ನು ಹಡೆಯಬೇಕು. ನಿಮ್ಮಿಂದ ಅಲ್ಲಿ ಮತ್ತೆ ಸಂತಾನ ಆಗಬೇಕು. ಮನುಷ್ಯ ಕುಲ ಹುಟ್ಟಬೇಕು" ಎಂದರು. "ಆಗಲಿ" ಎಂದು ಕೈ ಮುಗಿದರು. ಕೊರಗ-ಕೊರಗಿಯರು. ಅದರಂತೆ ಭೂಲೋಕಕ್ಕೆ ಬಂದರು. ಇಲ್ಲಿ ನೂರೊಂದು ಮಕ್ಕಳನ್ನು ಹಡೆದರು. ನೂರೊಂದು ಕುಲವನ್ನು ಮಾಡಿದರು. ಮನುಷ್ಯ ಸಂತಾನ ಹುಟ್ಟಿಸಿದರು.

ಮನುಷ್ಯರು ಹುಟ್ಟಿದರು. ಆದರೆ ಹುಟ್ಟಿದ ಮನುಷ್ಯರಿಗೆ ಅನ್ನ ಆಹಾರವಿಲ್ಲ. ದೈವದೇವರಿಗೆ ಪೂಜೆ ಇಲ್ಲ. ಇದಕ್ಕೇನು ಮಾಡುವುದು? ನಾರಾಯಣಸ್ವಾಮಿ ಯೋಚಿಸಿದರು. ಸ್ವರ್ಗದಲ್ಲಿ ಬತ್ತ ಇದೆ. ಅದನ್ನು ಭೂಮಿಗೆ ತರಬೇಕು ಎಂದುಕೊಂಡರು. ಹರಿಕಾರ ನಿಂಗನನ್ನು ಕರೆಸಿದರು. ಭೂಲೋಕದ ಸಂಗತಿ ತಿಳಿಸಿದರು. "ನೀನೀಗ ಮೇಲುಲೋಕದ ದೇವೇಂದ್ರನ ಬಳಿಗೆ ಹೋಗಬೇಕು. ಅಲ್ಲಿಂದ ಬತ್ತವನ್ನು ಕೇಳಿ ತರಬೇಕು. ಭೂಮಿಯಲ್ಲಿ ಮತ್ತೆ ಬಿತ್ತಿ ಬೆಳೆಯಬೇಕು" ಎಂದರು. ನಿಂಗ "ಆಗಲಿ" ಎಂದ. ಕೈ ಮುಗಿದು ಹೊರಟ. ದೇವೇಂದ್ರನ ಬಳಿಗೆ ಬಂದ. ಭೂಲೋಕದ ಸ್ಥಿತಿಯನ್ನು ವಿವರಿಸಿದ. "ಇಲ್ಲಿಂದ ನೀವು ಬತ್ತವನ್ನು

ಕಳುಹಿಸಿಕೊಡಬೇಕು. ಅಲ್ಲಿ ಮತ್ತೆ ಬೆಳೆಯಬೇಕು" ಎಂಬ ಸ್ವಾಮಿಯ ಮಾತನ್ನು ಹೇಳಿದ.

ದೇವೇಂದ್ರ ಬತ್ತವನ್ನು ಕರೆಸಿದ. ಬಂದ ಬತ್ತ ಕೈಮುಗಿದು ತಲೆಬಾಗಿ ನಿಂತ. "ನೀನೀಗ ಭೂಲೋಕಕ್ಕೆ ಹೋಗಬೇಕು. ಅಲ್ಲಿ ಹುಟ್ಟಿದ ನರರಿಗೆ ಅನ್ನ ಆಹಾರ ಇಲ್ಲ. ದೈವದೇವರಿಗೆ ಪೂಜೆ ಇಲ್ಲದಾಗಿದೆ. ನೀನು ಹೋಗಿ ಮತ್ತೆ ಅಲ್ಲಿ ಬೆಳೆ ಬೆಳೆಯಬೇಕು" ಎಂದರು. ಅದಕ್ಕೆ ಬತ್ತ " ಇಲ್ಲ, ನಾನು ಭೂಲೋಕಕ್ಕೆ ಹೋಗಲಾರೆ. ಹಿಂದೆ ಒಂದು ಜನುಮ ನಾನು ಅಲ್ಲಿ ಎತ್ತಿದ್ದೆ. ಅಲ್ಲಿ ನನ್ನನ್ನು ಕುಡಿಕೆಯಲ್ಲಿ ಬೇಯಿಸುತ್ತಾರೆ. ಮಾಂಸ ಮಾಡುವ ಮಡಿಕೆಯಲ್ಲಿ ಬೇಯಿಸುತ್ತಾರೆ. ಹಾಗೆ ಬೇಯಿಸಿ ತಿನ್ನುತ್ತಾರೆ. ಕಸಬರಿಕೆಯಲ್ಲಿ ನನ್ನನ್ನು ಗುಡಿಸುತ್ತಾರೆ. ಕಾಲಿನಲ್ಲಿ ತುಳಿಯುತ್ತಾರೆ. ಮೊರದಲ್ಲಿ ಗೇರುತ್ತಾರೆ. ಹೀಗಾಗಿ ನಾನು ಹೋಗಲಾರೆ " ಎಂದ. ದೇವೇಂದ್ರ ಸ್ವಾಮಿ ಏನು ಹೇಳಿದರೂ ಕೇಳಲಿಲ್ಲ. ಹೇಗೆ ಹೇಳಿದರೂ ಒಪ್ಪಲಿಲ್ಲ. ದೇವೇಂದ್ರಸ್ವಾಮಿ ಒತ್ತಾಯ ಮಾಡಿದ. "ಹೊನುಬಸವಯ್ಯ ಭೂಮಿಗೆ ಬರಬೇಕು. ನಾನು ಅವನ ಹಿಂದಿನಿಂದ ಬರುತ್ತೇನೆ" ಎಂದ ಬತ್ತ.

ದೇವೇಂದ್ರಸ್ವಾಮಿ ಹೊನುಬಸವಯ್ಯನನ್ನು ಕರೆಸಿದರು. ಬಂದ ಬಸವಯ್ಯ ಸ್ವಾಮಿಗೆ ತಲೆಬಾಗಿ ನಿಂತ."ದೇವೇಂದ್ರಸ್ವಾಮಿ ಭೂಲೋಕದ ಸ್ಥಿತಿಯನ್ನು ಹೇಳಿದರು. "ನೀನು ಈಗ ಭೂಲೋಕಕ್ಕೆ ಹೋಗಬೇಕು. ಭೂಮಿಯನ್ನು ಉತ್ತು ಮತ್ತೆ ಬೆಳೆ ಬೆಳೆಯಬೇಕು" ಎಂದರು. ಅದಕ್ಕೆ ಬಸವಯ್ಯ" ಇಲ್ಲ ನಾನು ಭೂಲೋಕಕ್ಕೆ ಹೋಗಲಾರೆ. ಹಿಂದೆ ಒಂದು ಜನುಮ ನಾನು ಅಲ್ಲಿ ಮಾಡಿದ್ದೆ. ಅಲ್ಲಿ ನನ್ನನ್ನು ಕಟ್ಟಿ ಹಾಕುತ್ತಾರೆ. ಹೊಡೆಯುತ್ತಾರೆ. ನನ್ನನ್ನು ಮೇಯಿಸುವವರಿಲ್ಲ. ಹುಲ್ಲು ಹಾಕುವವರಿಲ್ಲ. ಹಿಂಡಿ ನೀಡುವವರಿಲ್ಲ. ಮೈ ಉಜ್ಜುವವರಿಲ್ಲ. ಹೆಗಲಿಗೆ ಎಣ್ಣೆ ಹಚ್ಚುವವರಿಲ್ಲ. ನಾನು ಹೋಗಲಾರೆ" ಎಂದ. ದೇವೇಂದ್ರಸ್ವಾಮಿ ಹೇಗೆ ಹೇಳಿದರೂ ಕೇಳಲಿಲ್ಲ. ಎಷ್ಟು

ಹೇಳಿದರೂ ಒಪ್ಪಲಿಲ್ಲ. ಸ್ವಾಮಿ ಮತ್ತೆ ಒತ್ತಾಯ ಮಾಡಿದರು. ಮಾದಾರ ಚೆನ್ನ ಬಂದರೆ ಅವನ ಜೊತೆಗೆ ನಾನು ಬರುತ್ತೇನೆ " ಎಂದ ಬಸವಯ್ಯ.

ದೇವೇಂದ್ರಸ್ವಾಮಿ ಮಾದಾರಚೆನ್ನನನ್ನು ಕರೆಸಿದರು. ಬಂದ ಮಾದಾರಚೆನ್ನ ತಲೆಬಾಗಿ ನಿಂತ. ಸ್ವಾಮಿ ಭೂಲೋಕದ ಕತೆ ಹೇಳಿದರು. "ನೀನೀಗ ಭೂಲೋಕಕ್ಕೆ ಹೋಗಬೇಕು. ಅಲ್ಲಿ ಉತ್ತು ಮತ್ತೆ ಬಿತ್ತಬೇಕು" ಎಂದರು. ಮಾದಾರ ಚೆನ್ನ ಒಪ್ಪಿದ. ಬಸವಯ್ಯನಿಗೆ ಹೇಳಿದ. "ನೀನು ಭೂಲೋಕಕ್ಕೆ ಬರಬೇಕು. ನಿನ್ನನ್ನು ನಾನು ಮೇಯಿಸುತ್ತೇನೆ. ಮೀಸುತ್ತೇನೆ. ಮೈ ಉಜ್ಜುತ್ತೇನೆ. ಹುಲ್ಲು, ಹಿಂಡಿ, ನಾನು ಹಾಕುತ್ತೇನೆ. ಸತ್ತರೆ ನಿನಗೆ ಸಂಸ್ಕಾರ ಮಾಡುತ್ತೇನೆ. ನನ್ನೊಡನೆ ಬಾ " ಎಂದ. "ನಾನು ಬರಬೇಕಾದರೆ ಒಂದು ಷರತ್ತು ಇದೆ. ಹುಲ್ಲುಬೀಜವನ್ನು ನನ್ನ ಮುಂದೆ ಬಿತ್ತಬೇಕು. ಬೀಜವನ್ನು ಹಿಂದೆ ಬಿತ್ತಬೇಕು" ಎಂದ. ಬಸವಯ್ಯ ಆಗಲಿ ಎಂದು. ಎಲ್ಲರೂ ಒಪ್ಪಿದರು.

ಭೂಲೋಕಕ್ಕೆ ಬೀಜ, ಬಸವ, ಮಾದಾರಚೆನ್ನರು ಬಂದರು. ತುಂಬಿದ ನೀರನ್ನು ಆರಿಸಿದರು. ಭೂಮಿಯ ಜೌಳನ್ನು ಸೆಳೆದರು. ಗದ್ದೆಯನ್ನು ಬಯಲನ್ನು ಮಾಡಿದರು. ಹಳ್ಳವನ್ನು ಹೊಳೆ ಮಾಡಿದರು. ಮಾದಾರಚೆನ್ನ ಹೊನಬಸವಯ್ಯನನ್ನು ನೇಗಿಲಿಗೆ ಕಟ್ಟಿದ. ಮಾಡಿದ ಬಯಲನ್ನು ಉತ್ತ. ಮುಂದೆ ಹುಲ್ಲು ಬೀಜ ಬಿತ್ತಿದ. ಹಿಂದೆ ಬೀಜ ಬಿತ್ತಿದ. ಚಿನ್ನದಂಥ ಬೆಳೆ ಬೆಳೆಯಿತು. ಹುಟ್ಟಿದ ನರರಿಗೆ ಅನ್ನ ಆಹಾರವಾಯಿತು. ದೈವ ದೇವರಿಗೆ ಪೂಜೆ ನಡೆಯಿತು. ಎಲ್ಲರೂ ಸುಖ ಸಂತೋಷದಿಂದ ನಲಿದರು.

## ಅಕ್ಕತಂಗಿಯರ ಕತೆ

ಅರಮನೆಯಲ್ಲಿ ಅಜ್ಜರು ಇದ್ದರು. ಎಲ್ಲ ಸುಖ ಸಂಪತ್ತು ಇದೆ. ಆದರೆ ಸಂತಾನ ಇಲ್ಲ ಎಂಬ ದುಃಖ ಅವರಿಗೆ. ನಾರಾಯಣದೇವರಿಗೆ ಮೊರೆ ಇಡುತ್ತಾರೆ. ದೇವರ ಆದೇಶದಂತೆ ಹವನ ಮಾಡಿದರು. ಆ ಹವನದಲ್ಲಿ ಇಬ್ಬರು ಹುಡುಗಿಯರು

ಹುಟ್ಟಿ ಬಂದರು. ಅಜ್ಜ ಬಹಳ ಸಂತೋಷಗೊಂಡರು. ಅವರಿಗೆ ದದುಬಾಲಿ ಹಲುಬಾಲಿ ಎಂದು ಹೆಸರಿಟ್ಟರು.

ಅಜ್ಜ ಬಹು ಪ್ರೀತಿಯಿಂದ ಮಕ್ಕಳನ್ನು ಸಾಕಿದರು. ಮಕ್ಕಳು ಆಟಪಾಟ ಕಲಿತರು. ವಿದ್ಯೆ ಬುದ್ಧಿ ಕಲಿತರು. ಬೆಳೆದು ದೊಡ್ಡವರಾದರು. ಅಜ್ಜರು ಮದುವೆ ಮಾಡಬೇಕು ಎಂದು ಯೋಚಿಸಿದರು.



ನಗುರಾಸಿಸ್ವಾಮಿ ಬಳೆಗಾರನ ವೇಷ ಧರಿಸಿ ಬಂದ

ಹೀಗೆ ಇರುವಾಗ ಒಂದು ದಿನ ನಗುರಾಸಿ ಸ್ವಾಮಿ ಬಳೆಗಾರ ವೇಷದಿಂದ ಅಜ್ಜರ ಅರಮನೆಗೆ ಬಂದರು."ಯಾರಮ್ಮ ಅರಮನೆಯಲ್ಲಿ? ನಾನು ಬಳೆಗಾರ ಜೋಗಿ ಬಂದಿದ್ದೇನೆ. ಬನ್ನಿ, ಬಳೆ ಇಡುತ್ತೇನೆ" ಎಂದರು. ಹಲುಬಾಲಿ ಬರಲಿಲ್ಲ. ದದುಬಾಲಿ ಬಂದಳು. ಬಳೆ 'ಇಟ್ಟುಕೊಂಡಳು. ಬಳೆಯ ಹಣ ಕ್ರಯ ಕೊಡಬಂದಳು. "ನಾನು ನಗುರಾಸಿಸ್ವಾಮಿ. ಬಳೆಯ ಹಣಬೇಡ. ಇದು ನಾನು ಇಟ್ಟ ಧಾರೆ ಬಳೆ"ಎಂದರು. ಹೊರಟುಹೋದರು.

ಇನ್ನೊಂದು ದಿನ ದದುಬಾಲಿ ಗಂಡುವೇಷ ತೊಟ್ಟಳು. ಮುತ್ತಿನ ರಾಶಿ ಕಟ್ಟಿದಳು. ಕುದುರೆಯ ಮೇಲೆ ಹೇರಿದಳು. ಕುದುರೆ ಹತ್ತಿ ನಡೆದಳು. ನಗುರಾಸಿ ಸ್ವಾಮಿ ಅರಮನೆಗೆ ಬಂದಳು. "ಯಾರಯ್ಯ ಅರಮನೆಯಲ್ಲಿ?ನಾನು ಮುತ್ತಿನ ಶೆಟ್ಟಿ ಬಂದಿದ್ದೇನೆ. ಮುತ್ತುಕೊಳ್ಳಿ ಬನ್ನಿ ಸ್ವಾಮಿ " ಎಂದಳು. ನಗುರಾಸಿ ಸ್ವಾಮಿ ಬಂದರು. ಮುತ್ತುಕೊಂಡರು. ಮುತ್ತಿನ ಹಣ ಕೊಡಲು ಬಂದರು. " ಅಜ್ಜನ ಹೆಣ್ಣುಮಗಳು ನಾನು. ನಿಮ್ಮನ್ನು ಮೆಚ್ಚಿ ಬಂದಿದ್ದೇನೆ. ಇದು ಧಾರೆಯ ಮುತ್ತು" ಎಂದಳು. ಹೊರಟು ತನ್ನ ಅರಮನೆಗೆ ಬಂದಳು.

ನಗುರಾಸಿ ಸ್ವಾಮಿ ಜಾತಿಯವರ ಸಭೆ ಸೇರಿಸಿದರು. ಕುಟುಂಬದ ಕೂಟ ಕೂಡಿಸಿದರು. ಮದುವೆ ಮಾತಾಡಿದರು. ದಿಬ್ಬಣ ಕೂಡಿ ಅಜ್ಜರ ಅರಮನೆಗೆ ಬಂದರು. ಅಜ್ಜ ದಿಬ್ಬಣವನ್ನು ಎದುರುಗೊಂಡರು. ಚಪ್ಪರಕ್ಕೆ ಕರೆತಂದರು. ನಗುರಾಸಿಸ್ವಾಮಿ ದದುಬಾಲಿಯನ್ನು ಧಾರೆ ಎರೆದು ಕೊಟ್ಟರು. ನಗುರಾಸಿ ಸ್ವಾಮಿ ಅರಮನೆ. ದದುಬಾಲಿ ನಗುರಾಸಿ ಸ್ವಾಮಿ ಅರಮನೆಯಲ್ಲಿ ಸಂತಸದಿಂದ ಇದ್ದರು.

ಅಕ್ಕ ದದುಬಾಲಿಗೆ ಮದುವೆ ಆದುದು ತಂಗಿ ಹಲುಬಾಲಿಗೆ ಹೊಟ್ಟೆಕಿಚ್ಚಾಗುತ್ತದೆ. ಏನಾದರೂ ಮಾಡಿ ಅಕ್ಕನನ್ನು ಕೊಲ್ಲಬೇಕು ಎಂದುಕೊಂಡಳು.

ಕಜ್ಜಾಯದ ಸಾಮಾನು ತರಿಸಿದಳು. ಭಾವನಿಗೆ ಸಿಹಿಕಜ್ಜಾಯ ಮಾಡಿದಳು. ಅಕ್ಕನಿಗೆ ವಿಷಕಜ್ಜಾಯ ಮಾಡಿದಳು. ಕಜ್ಜಾಯದ ಹೊರೆ ಕಟ್ಟಿದಳು. ಅಜ್ಜರನ್ನು ಕರೆದುಕೊಂಡಳು. ಹೊರೆ ಹೊತ್ತಳು. ಅಕ್ಕನ ಅರಮನೆಗೆ ಹೊರಟಳು.

ದಾರಿಯಲ್ಲಿ ನದಿ ಹರಿಯುತ್ತಿತ್ತು. ಅಜ್ಜ ನದಿಯಲ್ಲಿ ಮಿಂದು ಬರುತ್ತೇನೆ ಎಂದರು. ನದಿಯಲ್ಲಿ ಮುಳುಗಿದರು. ಅಲ್ಲಿಂದ ನಗುರಾಸಿ ಸ್ವಾಮಿ ಅರಮನೆಗೆ ಬಂದರು. ದದುಬಾಲಿಗೆ ಅಜ್ಜರನ್ನು ಕಂಡು ಬಹಳ ಸಂತೋಷವಾಯಿತು. ಅಜ್ಜ ದದುಬಾಲಿಗೆ ಹೇಳಿದರು. "ನಿನ್ನ ತಂಗಿ ನಿನಗೆ ವಿಷ ಕಜ್ಜಾಯ ತಂದಿದ್ದಾಳೆ. ನೀನು ತಿನ್ನುವ ಮೊದಲು ಕೋಳಿಗೆ ಹಾಕಿನೋಡು" ಎಂದು ಸೂಚನೆ ಕೊಟ್ಟರು. ಅಲ್ಲಿಂದ ಹಲುಬಾಲಿ ಇರುವಲ್ಲಿಗೆ ಬಂದರು.

ಅಜ್ಜ, ಹಲುಬಾಲಿ, ನಗುರಾಸಿಸ್ವಾಮಿ ಅರಮನೆಗೆ ಬಂದರು. ಅರಮನೆಯಲ್ಲಿ ನಗುರಾಸಿಸ್ವಾಮಿ ಕಾಣಲಿಲ್ಲ. "ಅಕ್ಕಾ, ಭಾವ ಎಲ್ಲಿ"? ಅಕ್ಕನನ್ನು ಕೇಳಿದಳು. "ಭಾವ ಹೂವಿನ ವನಕ್ಕೆ ಹೋಗಿದ್ದಾರೆ " ಎಂದಳು ಅಕ್ಕ. ಅಕ್ಕನಿಗೆ ವಿಷಕಜ್ಜಾಯ ಕೊಟ್ಟಳು. ಭಾವನನ್ನು ಹುಡುಕಿ ಹೊರಟಳು. ಅರಮನೆಯ ಹೂ ತೋಟವೆಲ್ಲಾ ಅರಸಿದಳು. ಅಲ್ಲೆಲ್ಲೂ ಭಾವ ಕಾಣಲಿಲ್ಲ. ಬಾಳೆಯ ವನಕ್ಕೆ ಬಂದಳು. ಅಲ್ಲಿ ಭಾವನನ್ನು ಕಂಡಳು. ಭಾವನಿಗೆ ಸಿಹಿಕಜ್ಜಾಯ ಕೊಟ್ಟಳು. ಭಾವನಾದಿನಿ ಕೂಡಿದರು.

ತಂಗಿ ಕೊಟ್ಟ ಕಜ್ಜಾಯವನ್ನು ದದುಬಾಲಿ ಹಿಡಿದಳು. ತನ್ನ ನಾಯಿ, ಕೋಳಿಗೆ ಹಾಕಿದಳು. ಅವು ಕೂಡಲೆ ಸತ್ತೇಬಿದ್ದವು. ಅಕ್ಕ ತಂಗಿಯ ಮೋಸಕ್ಕೆ ಸಿಟ್ಟಾದಳು.

ಇತ್ತ ಹಲುಬಾಲಿಗೆ ಮುಟ್ಟು ನಿಂತಿತು. ತಿಂಗಳು ತುಂಬಿತು. ತುಂಬಿದ ಗರ್ಭಿಣಿ ಅಕ್ಕನ ಮನೆಗೆ ಬಂದಳು."ಅಕ್ಕಾ ಬೇನೆ ಮೂಡಿದೆ. ಅರಮನೆಯಲ್ಲಿ ಹೆರಿಗೆಗೆ ಜಾಗ ಕೊಡು " ಎಂದು ಬೇಡಿದಳು. ಅಕ್ಕ ಒಲ್ಲೆ ಎಂದಳು. 'ಅಕ್ಕಾ ಸುಡುಬೇನೆ ಮೂಡಿದೆ. ಭಾವನ ಕೋಣೆ ತೆರವು ಮಾಡಿಕೊಡು' ಎಂದು ಬೇಡಿದಳು. " ಅದಾಗದು, ಅದು ನಿನ್ನ ಭಾವನು ಮಲಗುವ ಕೋಣೆ" ಎಂದಳು. "ಅಕ್ಕಾ ಬೆನ್ನುಬಿಟ್ಟ ಬೇನೆ ಮೂಡಿದೆ. ಕೋಣ ಕಟ್ಟುವ ಕೊಟ್ಟಿಗೆ ಕೊಡು"ಎಂದಳು. "ಅದಾಗದು, ಅದು ನಿನ್ನ ಭಾವನ ಕೂಡುವ ಕೋಣೆ"ಎಂದಳು. "ಹೊಟ್ಟೆಕಚ್ಚುವ ಬೇನೆ. ಕೋಳಿಗೂಡನ್ನಾದರೂ ಬಿಟ್ಟುಕೊಡು" ಎಂದಳು."ಅದಾಗದು, ಅದು ನಿನ್ನ ಭಾವನ ಅಂಕದ ಕೋಳಿ" ಎಂದಳು. ಹೀಗೆ ಒಂದೊಂದು ನೆವ ಹೇಳಿ ಅಕ್ಕ ನಿರಾಕರಿಸಿದಳು.

ಆಗ ಹೊಟ್ಟೆಯಲ್ಲಿನ ಶಿಶು ಮಾತಾಡುತ್ತದೆ. "ಕಾಡಿಗೆ ಹೋಗು. ನುಕ್ಕಿಯ ಗೂಡು ಮಾಡು. ಬೇನೆಯಿಲ್ಲದೆ ನೀನು ಹಡೆಯುವೆ." ಎಂದಿತು. ಹಲುಬಾಲಿ ಕಾಡಿಗೆ ಹೋದಳು. ನುಕ್ಕಿಯ ಗೂಡು ಮಾಡಿದಳು. ಬೇನೆ ಇಲ್ಲದೆ ಹಡೆದಳು. ಗಂಡು ಮಗುವನ್ನು ಹೆತ್ತಳು.

ಹುಟ್ಟಿದ ಮಗುವಿಗೆ ರೆಕ್ಕೆ ಮೂಡುತ್ತದೆ. ಹಾರಿ ಅಜ್ಜರ ಅರಮನೆಗೆ ಬಂದಿತು. ಅರಮನೆಯ ಮುಂದಿನ ಗೋಳಿಮರದಲ್ಲಿ ಕುಳಿತಿತು. ಅಜ್ಜ ಕೋಲುಗೆದ್ದಲು ಮಾಡಿ ಎಸೆದ. ಮಗುವಿನ ರೆಕ್ಕೆ ಕತ್ತರಿಸಿದ. ಮಗು ನದಿಗೆ ಬಿತ್ತು. ಅಜ್ಜ ಹಗ್ಗ ಮಾಡಿ ನದಿಯಲ್ಲಿ ಬಿಟ್ಟ. ಅದರಲ್ಲಿ ತಾನು ಹೊರಟ. ಮಗು ಆ ಹಗ್ಗವನ್ನೇ ಕತ್ತರಿಸುತ್ತದೆ. ಅಜ್ಜ ನದಿಗೆ ಬಿದ್ದ. ನೀರಲ್ಲಿ ಮುಳುಗಿ ಏಳುವ ಅಜ್ಜನನ್ನು ಕಂಡು ಮಗು ಲೇವಡಿ ಮಾಡುತ್ತದೆ. "ಕಂತುತ್ತಾನೆ ಮುಳುಗುತ್ತಾನೆ ಮೊಮ್ಮಗಳಿಗೆ ಬಾಡಿ




ಅಜ್ಜ ಇಬ್ಬರಿಗೂ ಹಿತನುಡಿ ಹೇಳಿದ

ಹೇಳಿದ ಅಜ್ಜ ಕಂತುತಾನೆ ಮುಳುಗುತ್ತಾನೆ" ಸುದ್ದಿ ಹಲುಬಾಲಿಗೆ ಮುಟ್ಟಿತು. ಓಡಿಬಂದಳು.

ಮಗನಿಗೆ ಬುದ್ಧಿ ಹೇಳಿದಳು. ಅಜ್ಜನನ್ನು ಮೇಲೆ ತಂದಳು. ಅಲ್ಲಿಂದ ಎಲ್ಲರೂ ಕೂಡಿ ನಗುರಾಸಿ ಪಟ್ಟಣಕೆ ಬಂದರು. "ಮಗನನ್ನು ಪಡೆದೆಯಾ ತಂಗೀ" ಹಂಗಿಸಿ ದದುಬಾಲಿ ಕೇಳಿದಳು. "ನನಗೆ ಬೇನೆ ಬಂದರೂ ನೀನು ಜಾಗ ಕೊಡಲಿಲ್ಲ.

ತಂಗಿ ಎನ್ನುವ ಮಮತೆ ನಿನಗೆ ಬರಲಿಲ್ಲ" ತಂಗಿಯೂ ಅದೇ ಧಾಟಿಯಲ್ಲಿ ಮಾತಾಡುತ್ತಾಳೆ. "ನಿನಗೆ ಅಕ್ಕಾ ಎಂಬ ಮಮತೆ ಇತ್ತೇ?ನನಗೆ ವಿಷದಕಜ್ಜಾಯ ಕೊಟ್ಟೆ. ಒಡಹುಟ್ಟಿದ ಅಕ್ಕನನ್ನೇ ಕೊಲ್ಲಲು ಬಯಸಿದೆ. ಇದರಿಂದಲೆ ನಾನೂ ನಿನಗೆ ಹೆರಿಗೆಗೆ ಜಾಗ ಕೊಡಲಿಲ್ಲ" ಅಕ್ಕ ತಂಗಿಯರು ಜಗಳ ಮಾಡಿದರು. ಅಜ್ಜ ಇಬ್ಬರಿಗೂ ಹಿತನುಡಿ ಹೇಳಿದ. "ನೀವು ಅಕ್ಕತಂಗಿಯರು. ಇಬ್ಬರೂ ಈ ಅರಮನೆಯಲ್ಲಿ ಬಾಳಬೇಕು" ಎಂದರು. ಸ್ವಾಮಿಯೊಂದಿಗೆ ಅಕ್ಕ ತಂಗಿ ಸುಖವಾಗಿದ್ದರು.

* * *



ನಮ್ಮ ಬಹುಸಂಖ್ಯಾತ ಸಮುದಾಯ ಅನಕ್ಷರಸ್ಥರೇ ಹೊರತು ಅವಿದ್ಯಾವಂತರಲ್ಲ. ನೃಪತುಂಗ ಹೇಳುವಂತೆ ಅವರು "ಚದುರರ್ ನಿಜದಿಂ ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತ ಮತಿಗಳ್". ಅನುಭವದಲ್ಲಿ, ವಿವೇಕದಲ್ಲಿ, ವ್ಯವಹಾರದಲ್ಲಿ, ತಿಳುವಳಿಕೆಯಲ್ಲಿ ಆ ಜನ ಚದುರರು. ಹೀಗೆಂದು ಅವರನ್ನು ಅಕ್ಷರದಲಿತರನ್ನಾಗಿಯೂ ಉಳಿಸುವಂತಿಲ್ಲ. ಅವರಲ್ಲಿ ಅಕ್ಷರ ಕಲಿಯುವ ಸಾಮರ್ಥ್ಯವಿದೆ. ಕಲಿಸುವ ಹೊಣೆ ಸರ್ಕಾರಗಳ, ವಿಶ್ವವಿದ್ಯಾಲಯಗಳ ಮೇಲಿದೆ. ಈ ನಿಟ್ಟಿನಲ್ಲಿ ದೇಶದಾದ್ಯಂತ ಸಾಕ್ಷರತಾ ಆಂದೋಲನ ನಡೆಯುತ್ತಿದೆ. ಆದರೆ ಈ ಅಕ್ಷರ ಸಂಸ್ಕೃತಿಯ ಆಂದೋಲನದಲ್ಲಿ ಕಲಿತವರಿಗೆ ಮತ್ತು ಕಲಿಯುವವರಿಗೆ ಉತ್ತಮ ಗುಣಮಟ್ಟದ ಪುಸ್ತಕಗಳ ಅವಶ್ಯಕತೆ ಇದೆ. ಕಲಿತವರು ಮರೆಯದಂತೆ, ಕಲಿಕೆಯನ್ನು ಮುಂದುವರಿಸುವಂತೆ ನೋಡಿ ಕೊಳ್ಳುವುದು ಎಲ್ಲರ ಕರ್ತವ್ಯ.

ಕನ್ನಡ ವಿಶ್ವವಿದ್ಯಾಲಯವು ನಾಡಿನ ಹಲವು ವಿದ್ವಾಂಸರೊಂದಿಗೆ ಸೇರಿ ನಡೆಸಿದ ಒಂದು ಸಾಮೂಹಿಕ ಪ್ರಯತ್ನದ ಫಲವಾಗಿ ಈ ಪುಸ್ತಕ ರೂಪತಾಳಿದೆ. ನವಸಾಕ್ಷರರು ಈ ಪುಸ್ತಕವನ್ನು ಪ್ರೀತಿಯಿಂದ ಸ್ವೀಕರಿಸುತ್ತಾರೆಂದು ನಂಬಿದ್ದೇವೆ. ಈ ಯೋಜನೆಯ ಯಶಸ್ಸಿಗೆ ಕಾರಣರಾಗಿರುವ ಉನ್ನತ ಸಲಹಾ ಸಮಿತಿ ಹಾಗೂ ಸಂಪಾದಕ ಸಮಿತಿಯ ಸದಸ್ಯರಿಗೆ, ಲೇಖಕರಿಗೆ, ಕಲಾವಿದರಿಗೆ ಹಾಗೂ ಈ ಯೋಜನೆಯಲ್ಲಿ ಪ್ರತ್ಯಕ್ಷವಾಗಿ, ಪರೋಕ್ಷವಾಗಿ ನಮ್ಮೊಡನೆ ಪಾಲ್ಗೊಂಡವರೆಲ್ಲರಿಗೂ ನಮ್ಮ ಹೃತ್ಪೂರ್ವಕವಾದ ವಂದನೆಗಳು. ನಮ್ಮ ವಿಶ್ವವಿದ್ಯಾಲಯದ ಮೇಲೆ ವಿಶ್ವಾಸವಿಟ್ಟು ಇಂತಹ ಒಂದು ಗುರುತರವಾದ ಯೋಜನೆಯನ್ನು ವಹಿಸಿಕೊಟ್ಟ ಲೋಕಶಿಕ್ಷಣ ಇಲಾಖೆಯ ನಿರ್ದೇಶಕರಾದ ಶ್ರೀ ಲೂಕೋಸ್ ವಲ್ಲತ್ತರೈ ಅವರಿಗೆ ನನ್ನ ಕೃತಜ್ಞತೆಗಳು. ಓದುಗರು ಈ ಪುಸ್ತಕದ ಬಗ್ಗೆ ತಮ್ಮ ಅಭಿಪ್ರಾಯಗಳನ್ನು ತಿಳಿಸಿದರೆ ನಮ್ಮ ಪಠ್ಯಪುಸ್ತಕ ರಚನೆಗೆ ಉಪಯೋಗವಾಗುತ್ತದೆ.

**ಚಂದ್ರಶೇಖರ ಕಂಬಾರ**
ಕುಲಪತಿಗಳು